# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1314 |
| ಸದಸ್ಯರ ಹೆಸರು | : | ಶ್ರೀ ಎನ್.ರವಿಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 23-09-2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಗಳು |

****

| ಕ್ರಮ ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಬೆಂಗಳೂರು ನಗರದಲ್ಲಿ 52000ಕ್ಕೂ ಅಧಿಕ ಅನಧಿಕೃತ ನೀರಿನ ಸಂಪರ್ಕಗಳನ್ನು ಹೊಂದಿರುವ ಕುರಿತು ಸರಕಾರಕ್ಕೆ ಮಾಹಿತಿ ಇದೆಯೇ; ಈ ಅನಧಿಕೃತ ಸಂಪರ್ಕ ಪಡೆದವರ ಮೇಲೆ ಯಾವ ಕ್ರಮ ಕೈಗೊಳ್ಳಲಾಗಿದೆ; | ಬೆಂಗಳೂರು ಜಲಮಂಡಳಿಯು ಬಿ.ಬಿ.ಎಂ.ಪಿ ವ್ಯಾಪ್ತಿಯ ಪ್ರದೇಶದಲ್ಲಿ ಅಕ್ರಮ ಸಂಪರ್ಕ ಪಡೆದಿರುವವರನ್ನು ಗುರುತಿಸಲು ಕಾರ್ಯನಿರ್ವಾಹಕ ಅಭಿಯಂತರರು, ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಸಹಾಯಕ ಅಭಿಯಂತರರು, ಜಲ ಪರಿವೀಕ್ಷಕರು, ಮಾಪನ ಓದುಗರನ್ನೊಳಗೊಂಡ ವಿಶೇಷ ತಂಡವನ್ನು ರಚಿಸಿ ಮನೆ ಮನೆಗೂ ತೆರಳಿ ನೀರು ಸರಬರಾಜಾಗುವ ಸಮಯದಲ್ಲಿ ಪರೀಕ್ಷಿಸಿ ಒಟ್ಟು 57327 ಅನಧಿಕೃತ ಸಂಪರ್ಕಗಳನ್ನು ಪತ್ತೆ ಹಚ್ಚಲಾಗಿದ್ದು ಅವುಗಳಲ್ಲಿ 36136 ಅನಧಿಕೃತ ಒಳಚರಂಡಿ ಹಾಗೂ 21191 ಅನಧಿಕೃತ ನೀರಿನ ಸಂಪರ್ಕಗಳನ್ನು ಕೂಡಲೇ ಕಡಿತಗೊಳಿಸಲಾಗಿದೆ. |
| ಆ | ಅನಧಿಕೃತ ನೀರಿನ ಸಂಪರ್ಕ ಪತ್ತೆ ಹಚ್ಚದೆ ಜಲಮಂಡಳಿಯ ನೌಕರರು ಲಂಚ ಪಡೆದು ನಿರ್ಲಕ್ಷಿಸಿರುವುದು ಸರಕಾರದ ಗಮನಕ್ಕೆ ಬಂದಿದೆಯೇ; | ಬೆಂಗಳೂರು ಜಲಮಂಡಳಿಯ ಕಾರ್ಯನಿರ್ವಾಹಕ ಅಭಿಯಂತರರು, ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಸಹಾಯಕ ಅಭಿಯಂತರರು, ಜಲ ಪರಿವೀಕ್ಷಕರು, ಮಾಪನ ಓದುಗರನ್ನೊಳಗೊಂಡ ವಿಶೇಷ ತಂಡವು ಸದರಿ ಅನಧಿಕೃತ ಸಂಪರ್ಕಗಳನ್ನು ಪತ್ತೆ ಹಚ್ಚಿ ಸ್ಥಳದಲ್ಲೇ ಸದರಿ ಅನಧಿಕೃತ ಸಂಪರ್ಕಗಳನ್ನು ಮಂಡಳಿಯ ನಿಯಮಾನುಸಾರ ಕಡಿತಗೊಳಿಸಲಾಗಿರುತ್ತದೆ. |
| ಇ | ಈ ಅನಧಿಕೃತ ನೀರಿನ ಸಂಪರ್ಕದಿಂದ ಜಲಮಂಡಳಿಗೆ ಉಂಟಾದ ಆರ್ಥಿಕ ನಷ್ಟ ಎಷ್ಟು; ಇದಕ್ಕೆ ಯಾವ ಅಧಿಕಾರಿಯನ್ನು ಹೊಣೆಗಾರರನ್ನಾಗಿ ಮಾಡಲಾಗಿದೆ? | ಅನಧಿಕೃತವಾಗಿ ನೀರು ಮತ್ತು ಒಳಚರಂಡಿ ಸಂಪರ್ಕ ಪಡೆದಿರುವುದರ ಬಗ್ಗೆ ಜನಸಾಮಾನ್ಯರಲ್ಲಿ ಅರಿವು ಮೂಡಿಸಿ, ಜಲಮಂಡಳಿ ನಿಯಮಾನುಸಾರ ದಂಡ ವಿಧಿಸಿ ಅಧಿಕೃತಗೊಳಿಸಲಾಗುತ್ತಿದೆ. ಅಲ್ಲದೇ, ಅನಧಿಕೃತ ಸಂಪರ್ಕವನ್ನು ನಿಯಮಾನುಸಾರ ಅಧಿಕೃತಗೊಳಿಸಲು ಸಹಕರಿಸದೇ ಇರುವ ಕಟ್ಟಡದ ಮಾಲೀಕರ ವಿರುದ್ಧ ಬಿ.ಎಂ.ಟಿ.ಎಫ್ ನಲ್ಲಿ ದೂರು ದಾಖಲು ಮಾಡಿ ಅಧಿಕೃತಗೊಳಿಸಲಾಗುತ್ತಿದೆ. |

ಸಂಖ್ಯೆ: ನಅಇ 47 ಎಂಎನ್ಐ 2021

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ